## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 102 (165) |
| ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 16.07.2019 |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷೆಯ ಯೋಜನೆ ಸ್ವಚ್ಛ ಭಾರತ್ ಅಭಿಯಾನದಡಿ ರಾಜ್ಯವು ಇನ್ನೂ ಬಯಲು ಬಹಿರ್ದೆಸೆ ಮುಕ್ತ ರಾಜ್ಯವೆಂದು ಘೋಷಣೆಯಾಗದಿರುವುದು ನಿಜವೇ; | ಕೇಂದ್ರ ಜಲಶಕ್ತಿ ಮಂತ್ರಾಲಯದ (ಹಿಂದಿನ ಕುಡಿಯುವ ನೀರು & ನೈರ್ಮಲ್ಯ ಮಂತ್ರಾಲಯ) ಸೂಚನೆಯಂತೆ 2012-13ನೇ ಸಾಲಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ಶೌಚಾಲಯಗಳ ನಿರ್ಮಾಣ ಕುರಿತು ಬೇಸ್‌ಲೈನ್ ಸಮೀಕ್ಷೆಯನ್ನು ನಡೆಸಲಾಗಿತ್ತು.<br>ಸದರಿ ಸಮೀಕ್ಷೆಯ ಪ್ರಕಾರ ರಾಜ್ಯದ ಗ್ರಾಮೀಣ ಪ್ರದೇಶದಲ್ಲಿರುವ **70.26ಲಕ್ಷ** ಗ್ರಾಮೀಣ ಕುಟುಂಬಗಳ ಪೈಕಿ, **24.83 ಲಕ್ಷ** ಕುಟುಂಬಗಳು ಶೌಚಾಲಯ ಹೊಂದಿದ್ದು, **45.42ಲಕ್ಷ** ಕುಟುಂಬಗಳು ಶೌಚಾಲಯರಹಿತವಾಗಿರುವುದು ವರದಿಯಾಗಿರುತ್ತದೆ. ಈ ಎಲ್ಲಾ ಶೌಚಾಲಯರಹಿತ ಕುಟುಂಬಗಳಿಗೆ 2013-14ನೇ ಸಾಲಿನಿಂದ ಅಕ್ಟೋಬರ್, 2018ರ ಅಂತ್ಯಕ್ಕೆ ಶೌಚಾಲಯಗಳನ್ನು ನಿರ್ಮಿಸಿ, **19ನೇ, ನವೆಂಬರ್ 2018ರ "ವಿಶ್ವ ಶೌಚಾಲಯ ದಿನ"ದಂದು ಗ್ರಾಮೀಣ ಕರ್ನಾಟಕವನ್ನು "ಬಯಲು ಬಹಿರ್ದೆಸೆ ಮುಕ್ತ"** ಎಂದು ಘೋಷಣೆ ಮಾಡಲಾಗಿದೆ. |
| (ಆ) | ನವೆಂಬರ್ 2018ರ ಅಂತ್ಯದ ವೇಳೆಗೆ ರಾಜ್ಯವನ್ನು ಬಯಲು ಬಹಿರ್ದೆಸೆ ಮುಕ್ತ ರಾಜ್ಯವೆಂದು ಘೋಷಣೆ ಮಾಡುವ ಯೋಜನೆ ಯಾವ ಹಂತದಲ್ಲಿದೆ; | 2012ರ ಬೇಸ್‌ಲೈನ್ ಸಮೀಕ್ಷೆಯ ವರದಿಯಂತೆ ಶೌಚಾಲಯರಹಿತ ಎಲ್ಲಾ ಗ್ರಾಮೀಣ ಕುಟುಂಬಗಳಿಗೆ ವೈಯುಕ್ತಿಕ ಗೃಹ ಶೌಚಾಲಯಗಳನ್ನು ಅಕ್ಟೋಬರ್ 2018ರ ಅಂತ್ಯಕ್ಕೆ ವೈಯುಕ್ತಿಕ ಗೃಹ ಶೌಚಾಲಯಗಳನ್ನು ನಿರ್ಮಿಸುವ ಮೂಲಕ **19ನೇ, ನವೆಂಬರ್ 2018ರ "ವಿಶ್ವ ಶೌಚಾಲಯ ದಿನ"ದಂದು ಗ್ರಾಮೀಣ ಕರ್ನಾಟಕವನ್ನು "ಬಯಲು ಬಹಿರ್ದೆಸೆ ಮುಕ್ತ"** ಎಂದು ಘೋಷಿಸಲಾಗಿದೆ. |
| (ಇ) | ಈವರೆಗೆ ರಾಜ್ಯದ ಎಷ್ಟು ಜಿಲ್ಲೆಗಳನ್ನು ಬಯಲು ಬಹಿರ್ದೆಸೆ ಮುಕ್ತ ಜಿಲ್ಲೆಗಳೆಂದು ಘೋಷಿಸಲಾಗಿದೆ; | ರಾಜ್ಯದ 30 ಜಿಲ್ಲೆಗಳನ್ನು ಬಯಲು ಬಹಿರ್ದೆಸೆ ಮುಕ್ತ ಜಿಲ್ಲೆಗಳೆಂದು ಘೋಷಿಸಲಾಗಿದೆ. |

| | | |
|---|---|---|
| (ಈ) | ಬೆಳಗಾವಿ ಜಿಲ್ಲೆಯಲ್ಲಿ ಕಳೆದ 5 ವರ್ಷಗಳ ಅವಧಿಯಲ್ಲಿ ಕಟ್ಟಲಾದ ಶೌಚಾಲಯಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಬೆಳಗಾವಿ ಜಿಲ್ಲೆಯಲ್ಲಿ ಕಳೆದ 5 ವರ್ಷಗಳ ಅವಧಿಯಲ್ಲಿ ಕಟ್ಟಲಾದ ಶೌಚಾಲಯಗಳ ಸಂಖ್ಯೆಯನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ. |
| (ಉ) | ಬಯಲು ಶೌಚ ಮುಕ್ತ ಗುರಿ ಮುಟ್ಟಲು ಬೆಳಗಾವಿ ಜಿಲ್ಲೆಯಲ್ಲಿ ಇನ್ನೂ ಎಷ್ಟು ಶೌಚಾಲಯಗಳನ್ನು ನಿರ್ಮಾಣ ಮಾಡಬೇಕಾಗಿದೆ; ಯಾವ ಕಾಲಮಿತಿಯಲ್ಲಿ ಇದನ್ನು ಪೂರ್ಣಗೊಳಸಲಾಗುವುದು; | ಕೇಂದ್ರ ಜಲಶಕ್ತಿ ಮಂತ್ರಾಲಯದ (ಹಿಂದಿನ ಕುಡಿಯುವ ನೀರು & ನೈರ್ಮಲ್ಯ ಮಂತ್ರಾಲಯ) ಸೂಚನೆಯಂತೆ 2012-13ನೇ ಸಾಲಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ಶೌಚಾಲಯಗಳ ನಿರ್ಮಾಣ ಕುರಿತು ಬೇಸ್‌ಲೈನ್ ಸಮೀಕ್ಷೆಯನ್ನು ನಡೆಸಲಾಗಿತ್ತು.<br>ಸದರಿ ಸಮೀಕ್ಷೆಯ ಪ್ರಕಾರ ಬೆಳಗಾವಿ ಜಿಲ್ಲೆಯಲ್ಲಿ **5.41ಲಕ್ಷ** ಗ್ರಾಮೀಣ ಕುಟುಂಬಗಳ ಪೈಕಿ, **1.13ಲಕ್ಷ** ಕುಟುಂಬಗಳು ಶೌಚಾಲಯ ಹೊಂದಿದ್ದು, **4.28ಲಕ್ಷ** ಕುಟುಂಬಗಳು ಶೌಚಾಲಯರಹಿತವಾಗಿರುವುದು ವರದಿಯಾಗಿರುತ್ತದೆ. ಈ ಎಲ್ಲಾ ಶೌಚಾಲಯರಹಿತ ಕುಟುಂಬಗಳಿಗೆ 2013-14ನೇ ಸಾಲಿನಿಂದ ಅಕ್ಟೋಬರ್, 2018ರ ಅಂತ್ಯಕ್ಕೆ ಶೌಚಾಲಯಗಳನ್ನು ನಿರ್ಮಿಸಿ, **19ನೇ, ನವೆಂಬರ್ 2018ರ "ವಿಶ್ವ ಶೌಚಾಲಯ ದಿನ"ದಂದು ಬೆಳಗಾವಿ ಜಿಲ್ಲೆಯನ್ನು "ಬಯಲು ಬಹಿರ್ದೆಸೆ ಮುಕ್ತ"** ಎಂದು ಘೋಷಿಸಲಾಗಿದೆ.<br>ಈ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ವೈಯುಕ್ತಿಕ ಗೃಹ ಶೌಚಾಲಯಗಳನ್ನು ನಿರ್ಮಿಸುವುದು ಬಾಕಿ ಇರುವುದಿಲ್ಲ. |
| (ಊ) | ಬೆಳಗಾವಿ ಜಿಲ್ಲೆಗೆ ಸ್ವಚ್ಛ ಭಾರತ ಯೋಜನೆಯಡಿ ಈವರೆಗೆ ಶೌಚಾಲಯಗಳ ನಿರ್ಮಾಣಕ್ಕೆ ಒಟ್ಟು ಬಿಡುಗಡೆಯಾದ ಅನುದಾನವೆಷ್ಟು; ಬಳಕೆಯಾದ ಅನುದಾನವೆಷ್ಟು; ಬಾಕಿಯಿರುವ ಅನುದಾನವೆಷ್ಟು? (ವಿವರ ನೀಡುವುದು) | ಸ್ವಚ್ಛ ಭಾರತ್ ಮಿಷನ್ (ಗ್ರಾ) ಯೋಜನೆಯ 2018-19ನೇ ಸಾಲಿನಲ್ಲಿ ಶೌಚಾಲಯಗಳ ನಿರ್ಮಾಣಕ್ಕೆ ಬೆಳಗಾವಿ ಜಿಲ್ಲೆಗೆ ರೂ. 17781.64 ಲಕ್ಷಗಳು ಬಿಡುಗಡೆಯಾಗಿದ್ದು, ಈ ಅನುದಾನದಲ್ಲಿ ರೂ.17045.19ಲಕ್ಷಗಳು ಬಳಕೆಯಾಗಿದ್ದು, ರೂ.736.45ಲಕ್ಷಗಳ ಅನುದಾನ ಬಾಕಿ ಇದೆ. |

**(ಕೃಷ್ಣ ಬೈರೇಗೌಡ )**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೃಷ್ಣ ಬೈರೇಗೌಡ**
**ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್**
**ಸಚಿವರು**

ಅನುಬಂಧ - 1

# ಸ್ವಚ್ಛ ಭಾರತ ಮಿಷನ್ (ಗ್ರಾ)

## ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಪ್ರಶ್ನೆ ಸಂಖ್ಯೆ – 102 (165)

### ಕಳೆದ 5 ವರ್ಷಗಳಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ನಿರ್ಮಾಣ ಮಾಡಲಾದ ಶೌಚಾಲಯಗಳ ತಾಲ್ಲೂಕುವಾರು ವಿವರ

| ಕ್ರ.ಸಂ | ತಾಲ್ಲೂಕು | 2014–15 | 2015–16 | 2016–17 | 2017–18 | 2018–19 | ಒಟ್ಟು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8= (3+4+5+6+7) |
| 1 | ಅಥಣಿ | 6383 | 4102 | 8544 | 13612 | 19526 | 52167 |
| 2 | ಬೈಲಹೊಂಗಲ | 4881 | 3894 | 8178 | 11752 | 7318 | 36023 |
| 3 | ಬೆಳಗಾವಿ | 6679 | 2475 | 6937 | 8697 | 720 | 25508 |
| 4 | ಚಿಕ್ಕೋಡಿ | 9230 | 4078 | 7896 | 10012 | 22282 | 53498 |
| 5 | ಗೋಕಾಕ | 6180 | 3380 | 7451 | 11848 | 23506 | 52365 |
| 6 | ಹುಕ್ಕೇರಿ | 5091 | 2595 | 6496 | 11088 | 19697 | 44967 |
| 7 | ಖಾನಾಪೂರ | 5799 | 4351 | 13181 | 3467 | 2701 | 29499 |
| 8 | ರಾಮದುರ್ಗ | 3552 | 1587 | 2798 | 6833 | 19964 | 34734 |
| 9 | ರಾಯಬಾಗ | 2967 | 2430 | 5287 | 8706 | 15092 | 34482 |
| 10 | ಸವದತ್ತಿ | 5126 | 2870 | 6137 | 11977 | 10852 | 36962 |
| ಒಟ್ಟು | | **55888** | **31762** | **72905** | **97992** | **141658** | **400205** |